ಹರಿಹರ ಶ್ರೀನಿವಾಸರಾವ್*

# ಹೊಯ್ಸಳರ ಕಾಲದ ನವರಂಗಗಳಲ್ಲಿ ಸ್ವರ-ವಿಸ್ವರತೆಯ ವೈಶಿಷ್ಟ್ಯ

ಸಾಮಾನ್ಯವಾಗಿ ನವರಂಗ ಎಂದರೆ ಒಂಭತ್ತು ಅಂಕಣಗಳುಳ್ಳ ಒಂದು ಮಂಟಪ. ವೇದಿಕೆಯ ಮೇಲಿರುವ ನಾಲ್ಕು ಕಂಭಗಳ ಮಧ್ಯೆ ಮೇಲ್ಭಾಗದಲ್ಲಿ ಭುವನೇಶ್ವರಿ ಇರುತ್ತದೆ. ಇವುಗಳನ್ನು ವಾಸ್ತು ಗ್ರಂಥಗಳಾದ ಮಾನಸಾರ ಮತ್ತು ಸುಪ್ರಭೇದಾಗಮ ಗ್ರಂಥಗಳಲ್ಲಿ ನಾಟ್ಯ ಮಂಟಪವೆಂತಲೂ ಕರೆದಿದ್ದಾರೆ.

ಹೊಯ್ಸಳರ ಕಾಲದಲ್ಲಿಯ ನವರಂಗಗಳ ಕಂಭಗಳಲ್ಲಿ ಮತ್ತು ಭುವನೇಶ್ವರಿಗಳಲ್ಲಿ ವಿಶೇಷ ಕೆತ್ತನೆ ಇರುವುದನ್ನು ಬೇಲೂರು, ಸೋಮನಾಥಪುರ, ಹರಿಹರ ಮುಂತಾದ ಕಡೆಗಳಲ್ಲಿ ಕಾಣುತ್ತೇವೆ. ಈ ನವರಂಗಗಳ ವೇದಿಕೆಗಳನ್ನು ನಾಟ್ಯ, ಸಂಗೀತ ಮುಂತಾದ ಕಲಾ ಪ್ರದರ್ಶನಗಳಿಗೆ ಬಳಸುತ್ತಿದ್ದರೆನ್ನಲು ಬೇಲೂರಿನ ನವರಂಗದಲ್ಲಿ ಅಳವಡಿಸಲಾಗಿರುವ ಭರತ ನಾಟ್ಯ ಭಂಗಿಯ ಮದನಿಕಾ ವಿಗ್ರಹಗಳು, ಅವುಗಳ ಜೊತೆಯಲ್ಲಿರುವ ವಾದ್ಯಗಾರರ ಶಿಲ್ಪಗಳಿಂದ ತಿಳಿಯಬಹುದು. ನವರಂಗದ ವಿನ್ಯಾಸವನ್ನು ಹೇಗೆ ಸಂಗೀತದ ಸ್ವರ-ವಿಸ್ವರ ಕಂಪನಗಳಿಗೆ ತಕ್ಕಂತೆಯೇ ನಿರ್ಮಿಸುತ್ತಿದ್ದರು ? ಎನ್ನುವುದನ್ನು ಪರಿಶೀಲಿಸೋಣ.

ಭರತನ ನಾಟ್ಯ ಶಾಸ್ತ್ರದಲ್ಲಿ ನಾಟ್ಯ ಅಥವಾ ನೃತ್ಯ ಮಂಟಪವೂ, ಪ್ರೇಕ್ಷಾಗೃಹವೂ ಹೇಗೆ ಇರತಕ್ಕದ್ದು ? ಅದರ ಪ್ರಮಾಣ ಎಷ್ಟಿರ ತಕ್ಕದ್ದು ? ಅದಕ್ಕೆ ಕಾರಣಗಳೇನು ? ಎಂಬ ವಿಚಾರವನ್ನು ಸ್ಪಷ್ಟವಾಗಿ ಅಧ್ಯಾಯ ೧೨ರಲ್ಲಿ ೮ನೇ ಶ್ಲೋಕದಿಂದ ಪ್ರಾರಂಭವಾಗಿ ೧೩ನೇ ಶ್ಲೋಕದವರೆಗಿನ ನಿರೂಪಣೆಯಲ್ಲಿ ನೋಡಬಹುದು.

**ನಾಟ್ಯ ಮಂಟಪದ ಆಕಾರಗಳು :**

ಚತುರಸ್ರ, ತ್ರಿಕೋಣ, ವಿಕೃಷ್ಟ

**ನಾಟ್ಯ ಮಂಟಪದ ಅಳತೆ :**

೧೦೮ ಹಸ್ತ ; ಜ್ಯೇಷ್ಟ ಪ್ರಮಾಣದ್ದು ; ದೇವತೆಗಳಿಗೆ ಮೀಸಲಾಗಬೇಕಾದದ್ದು.

೬೪ ಹಸ್ತ ; ಮಧ್ಯಮ ಪ್ರಮಾಣದ್ದು ; ರಾಜರ ಪ್ರೇಕ್ಷಾಗೃಹ.

೩೨ ಹಸ್ತ ; ಕನಿಷ್ಠ ಪ್ರಮಾಣದ್ದು; ಸಾಮಾನ್ಯ ಪ್ರಜೆಗಳ ಪ್ರೇಕ್ಷಾಗೃಹ.

ಪ್ರಮಾಣ ವೇಷಾಂ ನಿರ್ದಿಷ್ಟಂ
ಹಸ್ತದಂಡ ಸಮಾಶ್ರಯಮ್ |
ಶತಂ ಚಾಷ್ಟಾ ಚತುಃ ಷಷ್ಟಿ-
ರ್ಹಸ್ತಾ ದ್ವಾತ್ರಿಂಶ ದೇವಚ ||೮||

* ನಂ. ೭೫-೧೫, ಒಂದನೆಯ ಮಹಡಿ, ೨ನೆಯ ಅಡ್ಡರಸ್ತೆ, ೫ನೆಯ ಬ್ಲಾಕ್, ಬನಶಂಕರಿ ೩ನೆಯ ಹಂತ, ಬೆಂಗಳೂರು-೫೬೦ ೦೮೫

ಅಷ್ಟಾಧಿ ಕಂ ಶತಂ ಜ್ಯೇಷ್ಟಂ
ಚತುಷಷ್ಟಿಸ್ತು ಮಧ್ಯಮಮ್ |
ಕನೀಯಸ್ತು ತಥಾ ವೇಶ್ಮ
ಹಸ್ತಾ ದ್ವಾತ್ರಿಂಶ ದಿಷ್ಯತೇ ||೧೦||

ದೇವಾನಾಂತುಭವೇ ಜ್ಯೇಷ್ಠಂ
ನೃಪಾಣಾಂ ಮಧ್ಯಮ ಭವೇತ್ |
ಶೇಷಾಣಾಂ ಪ್ರಕೃತೀನಾಂತು
ಕನೀಯಸ್ಸಂ ವಿಧೀಯತೇ ||೧೧||

ಪ್ರೇಕ್ಷಾಗೃಹಾಣಾಂ ಸರ್ವೇಷಾಂ
ಪ್ರಶಸ್ತಂ ಮಧ್ಯಮಂಸ್ಮೃತಮ್ |
ತತ್ರ ಪಾಠ್ಯಂಚ ಗೇಯಂಚ
ಸುಖ ಶ್ರಾವ್ಯತರಂ ಭವೇತ್ ||೧೨||

ಪ್ರೇಕ್ಷಾಗೃಹಾಣಾಂ ಸರ್ವೇಷಾಂ
ತ್ರಿಪ್ರಕಾರೋ ವಿಧಿಃಸ್ಮೃತಃ |
ವಿಕೃಷ್ಟಶ್ಚತುರಸ್ರಶ್ಚ
ತ್ರ್ಯಸ್ರ ಚೈವ ಪ್ರಯೋಕ್ತೃಭಿಃ ||೧೩||
(ನಾಟ್ಯಶಾಸ್ತ್ರ : ಅಧ್ಯಾಯ ೧೨)

*ಪ್ರೇಕ್ಷಾಗೃಹವು ಉದ್ದವಾಗಿದ್ದಲ್ಲಿ ನಟರ ಸಂಭಾಷಣೆಯೂ, ಗೀತೆಗಳ ವರ್ಣ ಸ್ವರಗಳೂ ಸ್ಫುಟ ವಾಗಿ ಉಚ್ಚಾರಣೆಯಾಗದೇ ವಿಸ್ವರತೆಯನ್ನು ಪಡೆಯು ವುದರಿಂದಲೂ ; ಅಭಿನೇತೃಗಳ ಮುಖದ ನಾನಾ ದೃಷ್ಟಿ ಭಾಗಗಳು ಅಸ್ಪಷ್ಟವಾಗಿ ಗೋಚರಿಸುವುದ ರಿಂದಲೂ ಪ್ರೇಕ್ಷಾಗೃಹಗಳಲ್ಲಿ ೬೪ ಹಸ್ತಗಳುಳ್ಳ ಮಧ್ಯಮ ಪರಿಮಾಣದ ಪ್ರೇಕ್ಷಾಗೃಹವೇ ಶ್ರೇಷ್ಠವೆಂದೂ, ತಿಳಿಸಿದ್ದಾನೆ. ಕಾರಣ ಅದರಲ್ಲಿ ಸಂಭಾಷಣೆಗಳೂ ವಾದ್ಯಗಳೂ ಪ್ರೇಕ್ಷಕರಿಗೆ ಸುಖವಾಗಿ ಕೇಳಿಬರುತ್ತವೆ ಎಂಬುದು ಭರತಾಚಾರ್ಯನ ಇಂಗಿತ. ಇಲ್ಲಿ ವಿಸ್ವರ ವೆಂದರೆ ಪ್ರತಿಧ್ವನಿ (Echo) ಎಂದೂ ಅರ್ಥೈಸ ಬಹುದು.

ಈ ಶ್ಲೋಕಗಳಲ್ಲಿ ಬಂದಿರುವ 'ಅನೇನೈವ ಪ್ರಮಾಣೇನ ವಕ್ಷ್ಯಾಮ್ಯವೇಷ್ಯಂ ವಿನಿರ್ಣಯಮ್'' ಎಂದು ನಿರ್ದಿಷ್ಟವಾಗಿ ನಿರ್ದೇಶಿತವಾಗಿರುವ ವಾಕ್ಯವನ್ನೂ ಮತ್ತು ಶಾಸನೋಕ್ತವಾಗಿರುವ 'ಸಂಗೀತ ಪ್ರಸಂಗ ಭಂಗಿ ಸಂಗತ ಚತುರ ಭರತನುಂ | ಶಬ್ದ ವಿದ್ಯಾ ಸಮಗ್ರ ಲಕ್ಷಣ ಸುಶಿಕ್ಷನುಂ || (Ec cv ಬೇ. ೫೮) ಮತ್ತು 'ಭರತಾಗಮ ಭವ ನಿಹಿತ ಮಹನೀಯ ಪ್ರದೀಪೆ' (ಅದೇ ಶಾಸನ) ಎನ್ನುವಂಥ ಸಾಲುಗಳನ್ನು ಗಮನಿಸಿ ಬೇಲೂರಿನ ವಿಜಯನಾರಾಯಣ ಸ್ವಾಮಿ ದೇವಾಲಯ, ಹರಿಹರದ ಹರಿಹರೇಶ್ವರ ದೇವಾಲಯ, ಹಿಡಿಂಬೇಶ್ವರ ದೇವಾಲಯ ಚಿತ್ರದುರ್ಗ, ಇವುಗಳಲ್ಲಿಯ ನವರಂಗಗಗಳ ಉದ್ದಗಲಗಳನ್ನು ಪರೀಕ್ಷಿಸಿದಾಗ ಅವುಗಳ ಪರಿಮಾಣವು ಕ್ರಮವಾಗಿ ಸು. ೬೩ ಹಸ್ತ (ಗೇಣು), ೩೩ ಹಸ್ತ ಮತ್ತು ೩೩ ಹಸ್ತ ಇರುವುದಾಗಿ ಸ್ಥಿರ ಪಟ್ಟಿತು. ಇಲ್ಲಿ ೧ ಹಸ್ತ=೧ ಗೇಣು ಎಂದೂ ೧ ಗೇಣು=೮" (ಸಾಮಾನ್ಯ ಮನುಷ್ಯನ ಗೇಣು) ಎಂದೂ ಗ್ರಹಿಸಿಕೊಳ್ಳಲಾಗಿದೆ : ಇವುಗಳೆಲ್ಲವೂ ಚತುಸ್ರಾಕಾರ ವಾಗಿರುವುದನ್ನೂ ಗಮನಿಸಲಾಗಿದೆ. ಅವು ಕ್ರಮವಾಗಿ ೧೨.೮೦ ಮೀ (೪೨'×೪೨'), ೬.೭೧ ಮೀ (೨೨'×೨೨'), ೬.೭೧ ಮೀ. (೨೨'×೨೨') ಉದ್ದಗಲಗಳನ್ನು ಹೊಂದಿವೆ.

* ರಂಗಸ್ಥಳ ಪು. ೨೩೯, ೨೪೦ ; ಭರತ ನಾಟ್ಯ ದಿಗ್ದರ್ಶನ—ವಿ.ಎಸ್. ಕೌಶಿಕ್




ಬೇಲೂರು ಶ್ರೀ ಚೆನ್ನಕೇಶವ ದೇವಸ್ಥಾನ
ಬೇಲೂರು ಮಧ್ಯಮ ಪ್ರಮಾಣದ ಪ್ರೇಕ್ಷಾಗೃಹ
(೬೩ ಹಸ್ತ ಪ್ರಮಾಣ)




ಶ್ರೀ ಹರಿಹರೇಶ್ವರ ದೇವಸ್ಥಾನ
ಹರಿಹರ ಕನಿಷ್ಠ ಪ್ರಮಾಣದ
ಪ್ರೇಕ್ಷಾಗೃಹ (೩೩ ಹಸ್ತ ಪ್ರಮಾಣ)




ಶ್ರೀ ಹಿಡಿಂಬೇಶ್ವರ ದೇವಸ್ಥಾನ
ಚಿತ್ರದುರ್ಗ, ಕನಿಷ್ಠ ಪ್ರಮಾಣದ
ಪ್ರೇಕ್ಷಾಗೃಹ (೩೩ ಹಸ್ತ ಪ್ರಮಾಣ)

ಹೀಗೆ ದೊರಕಿರುವ ಆಧಾರಗಳ ಮೇಲೆ ಬೇಲೂರಿನ ಚೆನ್ನಕೇಶವ ದೇವಸ್ಥಾನ, ಕಪ್ಪೆ ಚೆನ್ನಿಗರಾಯ ಮತ್ತು ವೀರನಾರಾಯಣಸ್ವಾಮಿ ದೇವಸ್ಥಾನದ ನವರಂಗಗಳಲ್ಲಿ, ಹೊಯ್ಸಳರ ಕಾಲದಲ್ಲಿ ಪ್ರಮುಖವಾಗಿ ಪ್ರಚಲಿತವಿದ್ದ 'ಯಂಶೈವೋ ಮಾಪಸತೇ....' ಧ್ಯಾನ ಶ್ಲೋಕವನ್ನು ವೇದಗಳನ್ನು ಹಾಡುವ ಸ್ವರ ಸಂಚಾರದಿಂದ ಯುಕ್ತವಾದ ರೇವತಿ ರಾಗದಲ್ಲಿ ಹಾಡಿ ಧ್ವನಿಮುದ್ರಿಕೊಂಡು ಅದರ ಸ್ವರ ಕಂಪನಗಳಲ್ಲಾಗುವ ವ್ಯತ್ಯಾಸವನ್ನು ಗುರ್ತಿಸಿದಾಗ ಈ ಕೆಳಗಿನ ಅಂಶಗಳು ವ್ಯಕ್ತವಾದವು.

೧. ಚೆನ್ನಕೇಶವ ದೇವಸ್ಥಾನದ ನವರಂಗವು ಸು. ೬೩ ಹಸ್ತ ಪ್ರಮಾಣ ಮತ್ತು ಚತುರಸ್ರಾಕಾರವನ್ನು ಹೊಂದಿರುವುದರಿಂದ, ಭರತ ನಾಟ್ಯಶಾಸ್ತ್ರದ ಪ್ರಕಾರ ಮಧ್ಯಮ ಪ್ರಮಾಣದ ಪ್ರೇಕ್ಷಾಗೃಹವಾಗಿರುತ್ತದೆ.

೨. ಧ್ವನಿಯ ತರಂಗಗಳ ವಿಸ್ವರತೆ ಚೆನ್ನಕೇಶವ ಸ್ವಾಮಿ ದೇವಸ್ಥಾನದ ನವರಂಗಕ್ಕೂ, ವೀರನಾರಾಯಣ ಸ್ವಾಮಿ ದೇವಸ್ಥಾನದ ನವರಂಗಕ್ಕೂ ಹೋಲಿಸಿ ನೋಡಿದಾಗ ಅದು ೫ ರಷ್ಟು ಕಡಿಮೆ ಇರುತ್ತದೆ.

೩. ಚೆನ್ನಕೇಶವ ದೇವಸ್ಥಾನದಲ್ಲಿರುವ ಸೂಕ್ಷ್ಮ ಕಲಾಕುಶಲತೆಯಿಂದಾಗಿಯೂ ವಿಸ್ವರತೆ ಕಡಿಮೆ ಇರುವ ಸಾಧ್ಯತೆಗಳಿವೆ. ಈ ಬಗ್ಗೆ ಹೆಚ್ಚಿನ ಸಂಶೋಧನೆಯನ್ನು ನಡೆಸಲಾಗುತ್ತಿದೆ.

೪. ವಿಷ್ಣುವರ್ಧನನ ಕಾಲದಲ್ಲಿ ಈ ನವರಂಗವು ಬಯಲು ಪ್ರೇಕ್ಷಾಗೃಹವೆಂದು ವಿದ್ವಾಂಸರು ಅಭಿಪ್ರಾಯಪಟ್ಟರೂ, ಮತ್ತು ಅದೇ ದೇವಸ್ಥಾನದ ಸುಕನಾಸಿ, ಗರ್ಭಗೃಹಗಳು ನವರಂಗದ ಅಳತೆಗಿಂತ ಕಡಿಮೆ ಇದ್ದರೂ. ಧ್ವನಿಯ ಕಂಪನ (ಸ್ವರ-ವಿಸ್ವರತೆ)ದಲ್ಲಿ ಹೆಚ್ಚಿನ ವ್ಯತ್ಯಾಸವಿಲ್ಲದಿರುವುದು ಪ್ರಮುಖ ಅಂಶ. ಚಿತ್ರದುರ್ಗದ ಹಿಡಿಂಬೇಶ್ವರ ದೇವಸ್ಥಾನ ಮತ್ತು ಬೇಲೂರಿನ ವೀರ ನಾರಾಯಣಸ್ವಾಮಿ ದೇವಸ್ಥಾನಗಳ ನವರಂಗ, ಸುಕನಾಶಿ, ಗರ್ಭಗೃಹಗಳಲ್ಲಿಯ ವಿಸ್ವರತೆಯನ್ನು ಸ್ಪಷ್ಟವಾಗಿ ಕೇಳಬಹುದಾದ್ದರಿಂದ, ಹಿಂದಿನ ಬಯಲು ನವರಂಗಕ್ಕೂ ಈಗ ಜಾಲಂಧರ ಮುಂತಾದವುಗಳಿಂದ ಮುಚ್ಚಲಾಗಿರುವ ವಿಜಯನಾರಾಯಣ ಸ್ವಾಮಿ ದೇವಸ್ಥಾನದಲ್ಲಿಯ ಸುಸ್ವರತೆಯಲ್ಲಿ ಗಮನಾರ್ಹ ಬದಲಾವಣೆ ಇಲ್ಲ ಎಂಬ ಅಭಿಪ್ರಾಯಕ್ಕೆ ಬರಬಹುದು.

ಮೇಲ್ಕಂಡ ಸಾಧಾರಗಳಿಂದ ಹೊಯ್ಸಳರ ಕಾಲದ ನವರಂಗಗಳನ್ನು ಸುಸ್ವರತೆ ಮತ್ತು ವಿಸ್ವರತೆಯನ್ನು ಗಮನಿಸಿಯೇ ರಚಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. 'ಶಬ್ದವಿದ್ಯಾ ಸುಲಕ್ಷಣ' 'ಭರತಾಗಮ ಭವನಿಹಿತ ಮತಿ' ಮುಂತಾದ ಶಾಸನೋಕ್ತಿಗಳು, ಭರತ ನಾಟ್ಯದಲ್ಲಿಯ ವಿವರಣೆಗಳು ಅಂದಿನವರಿಗೂ ಈ ವೈಜ್ಞಾನಿಕ ಸತ್ಯದ ಅರಿವಿತ್ತೆನ್ನುವುದಕ್ಕೆ ನಿದರ್ಶನಗಳಾಗಿವೆ.